


# ಕರ್ನಾಟಕ ವಿಧಾನ ಪರಿಷತ್ತು

## ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

**ಚುಕ್ಕೆ ರಹಿತ ಪ್ರಶ್ನೆ**

ದಿನಾಂಕ : 17-03-2021 ಪ್ರಶ್ನೆ ಸಂಖ್ಯೆ : 1201 (1488)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಕಾಂತ್‌ರಾಜು (ಬಿಎಂಎಲ್) (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರ ನೀಡಬೇಕಾದ ದಿನಾಂಕ : 17-03-2021

ಉತ್ತರಿಸುವ ಸಚಿವರು : ಮುಜರಾಯಿ ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು

ವಿಷಯ : EWS (Economically Weaker Section) ಪಡೆಯುವ ಮಾನದಂಡಗಳ ಬಗ್ಗೆ

(ಅ) ಕೇಂದ್ರ ಸರ್ಕಾರದ ಆದೇಶದ ಅನ್ವಯ EWS (Economically Weaker Section)ಪ್ರಮಾಣ ಪತ್ರ ಪಡೆಯಲು ರಾಜ್ಯ ಸರ್ಕಾರದಿಂದ ಯಾವಾಗ ಆದೇಶ ಹೊರಡಿಸಲಾಯಿತು; ಆದೇಶದ ಪ್ರತಿಯನ್ನು ಒದಗಿಸುವುದು ;

(ಆ) EWS (Economically Weaker Section) ಪ್ರಮಾಣ ಪತ್ರ ಪಡೆಯುವ ಸಂಬಂಧ ರಾಜ್ಯದಲ್ಲಿರುವ ಯಾವ ಯಾವ ಜಾತಿಗಳು ಇದರ ವ್ಯಾಪ್ತಿಯಡಿ ಬರುತ್ತವೆ ; ವಿವರವಾದ ಮಾಹಿತಿ ಒದಗಿಸುವುದು ;

(ಇ) ಈ ಪ್ರಮಾಣ ಪತ್ರ ಪಡೆಯಲು ಜಾತಿಗಳ ಒಳ ಪಂಗಡಗಳನ್ನು ನಿರೂಪಿಸುವ ಪ್ರಮಾಣ ಪತ್ರವನ್ನು ಕೇಳುತ್ತಿದ್ದು, ಇದರಿಂದ ಸಾರ್ವಜನಿಕರಿಗೆ ತೊಂದರೆಯಾಗುತ್ತಿರುವುದು ನಿಜವೇ ;

(ಈ) ಜಾತಿಯನ್ನು ರುಜುವಾತು ಪಡಿಸುವ ಶಾಲಾ ದಾಖಲಾತಿ ಪ್ರಮಾಣ ಪತ್ರಗಳಲ್ಲಿ ಮುಖ್ಯವಾದ ಜಾತಿಯ ಹೆಸರು ಮಾತ್ರ ಇದ್ದು, ಒಳಪಂಗಡಗಳ ಹೆಸರು ಇಲ್ಲದೇ ಇರುವುದರಿಂದ ಸರ್ಕಾರ ಇದರ ಬಗ್ಗೆ ಯಾವ ಕ್ರಮಗಳನ್ನು ಕೈಗೊಂಡಿದೆ ;

(ಉ) ಬಡವರಿಗೆ ಮತ್ತು ಅರ್ಹರಿಗೆ ಅನುಕೂಲವಾಗುವಂತೆ ಯಾವಾಗ ಸರ್ಕಾರ ಆದೇಶ ಹೊರಡಿಸುವುದು ?